# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | | 1713 |
| ಮಾನ್ಯ ಸದಸ್ಯರ ಹೆಸರು | | ಶ್ರೀ ಎನ್.ಎಸ್. ಬೋಸ್‌ರಾಜು<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ಸಚಿವರು | | ಮಾನ್ಯ ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಉತ್ತರಿಸಬೇಕಾದ ದಿನಾಂಕ | | 23-03-2020 |
| ಪ್ರಶ್ನೆ | | ಉತ್ತರ |
| (ಅ) | ರಾಯಚೂರಿನಲ್ಲಿರುವ ಪಿ.ಜಿ. ಕೇಂದ್ರವನ್ನು ಯಾವ ವರ್ಷದಲ್ಲಿ ಪ್ರಾರಂಭಿಸಲಾಗಿದೆ. ಇದಕ್ಕೆ ಎಷ್ಟು ಎಕರೆ ಜಾಗ ನೀಡಲಾಗಿದೆ. ಸದರಿ ಪಿ.ಜಿ. ಕೇಂದ್ರಕ್ಕೆ ನೀಡಿರುವ ಮೂಲಭೂತ ಸೌಲಭ್ಯಗಳೇನು; | ರಾಯಚೂರು ಸ್ನಾತಕೋತ್ತರ ಕೇಂದ್ರವನ್ನು 1992ನೇ ಸಾಲಿನಲ್ಲಿ ಪ್ರಾರಂಭಿಸಲಾಗಿದೆ. ಈ ಸ್ನಾತಕೋತ್ತರ ಕೇಂದ್ರವು 250 ಎಕರೆ ವಿಸ್ತೀರ್ಣವನ್ನು ಹೊಂದಿದೆ. ಈ ಸ್ನಾತಕೋತ್ತರ ಕೇಂದ್ರವು ಆಡಳಿತ ಕಛೇರಿ, ತರಗತಿ ಕೊಠಡಿ, ಕಾರ್ಯನಿರತ ಮಹಿಳೆಯರ ವಸತಿ ನಿಲಯ, ವಿದ್ಯಾರ್ಥಿ ನಿಲಯ, ಗ್ರಂಥಾಲಯ ಕಟ್ಟಡ, ಅತಿಥಿ ಗೃಹ ಮತ್ತು ಅಡಿಟೋರಿಯಂ ಕಟ್ಟಡಗಳನ್ನು ಒಳಗೊಂಡಿದೆ. |
| (ಆ) | 2017-18 ಹಾಗೂ 2018-19ನೇ ಸಾಲಿನ ಶೈಕ್ಷಣಿಕ ವರ್ಷದಲ್ಲಿ ಪದವಿ ವಿದ್ಯಾರ್ಥಿಗಳಿಗೆ ಲ್ಯಾಪ್‌ಟ್ಯಾಪ್ ವಿತರಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | **2017-18ನೇ** ಸಾಲಿನ ಆಯವ್ಯಯ ಭಾಷಣದ ಘೋಷಣೆಯನ್ವಯ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆದಿರುವ ವಿದ್ಯಾರ್ಥಿಗಳ ಕುಟುಂಬದ ವಾರ್ಷಿಕ ವರಮಾನ ರೂ.2.50 ಲಕ್ಷಗಳವರೆಗಿನ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್‌ಗಳನ್ನು ಉಚಿತವಾಗಿ ನೀಡಲು ಉದ್ದೇಶಿಸಿ, ಕೆ.ಟಿ.ಪಿ.ಪಿ ನಿಯಮಗಳನ್ವಯ ಲ್ಯಾಪ್‌ಟಾಪ್‌ಗಳ ಖರೀದಿಗೆ ದಿನಾಂಕ: 21.12.2017ರಂದು ಟೆಂಡರ್ ಆಹ್ವಾನಿಸಲಾಗಿರುತ್ತದೆ. ಟೆಂಡರ್ ಪ್ರಕ್ರಿಯೆ ಪೂರ್ಣಗೊಂಡು ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್‌ಗಳನ್ನು ವಿತರಿಸುವ ಪ್ರಕ್ರಿಯೆಯನ್ನು 2017-18ನೇ ಶೈಕ್ಷಣಿಕ ವರ್ಷದಲ್ಲಿ ಪೂರ್ಣಗೊಳಿಸಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ, ಪ್ರಸ್ತುತ ವರ್ಷದಲ್ಲಿಯೇ ಉಚಿತ ಲ್ಯಾಪ್‌ಟಾಪ್ ಯೋಜನೆಯನ್ನು ಸಾಂಕೇತಿಕವಾಗಿ ಪ್ರಾರಂಭಿಸುವ ಉದ್ದೇಶದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಕಲಂ 4ಜಿ ರಡಿ ಪ್ರದತ್ತವಾದ ಅಧಿಕಾರದನ್ವಯ ವಿನಾಯಿತಿ ಪಡೆದು, 2016-17ನೇ ಸಾಲಿನ ಟೆಂಡರ್‌ನ ಕನಿಷ್ಟ ಅರ್ಹ ಬಿಡ್ ದಾರರಿಂದ 1800 ಲ್ಯಾಪ್‌ಟಾಪ್‌ಗಳನ್ನು ಖರೀದಿಸಿ ವಿದ್ಯಾರ್ಥಿಗಳಿಗೆ ವಿತರಿಸಲಾಗಿರುತ್ತದೆ.<br>**2018-19ನೇ** ಸಾಲಿನಲ್ಲಿ ಕಾಲೇಜು ಶಿಕ್ಷಣ ಇಲಾಖೆಯು ಯಾವುದೇ ಲ್ಯಾಪ್‌ಟಾಪ್‌ಗಳನ್ನು ಖರೀದಿಸಿರುವುದಿಲ್ಲ. |

| | | |
|---|---|---|
| (ಇ) | ರಾಯಚೂರಿನಲ್ಲಿ ಉದ್ದೇಶಿಸಿರುವ ನೂತನ ವಿಶ್ವವಿದ್ಯಾಲಯಕ್ಕೆ ಎಷ್ಟು ಎಕರೆ ಜಾಗ ಗುರುತಿಸಲಾಗಿದೆ. ಸದರಿ ವಿಶ್ವವಿದ್ಯಾಲಯ ಪ್ರಾರಂಭಿಸಲು ಬೇಕಾಗಿರುವ ಅನುದಾನವನ್ನು ಒದಗಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಪ್ರಸ್ತುತ ಗುಲ್ಬರ್ಗಾ ವಿಶ್ವವಿದ್ಯಾಲಯದ ಸ್ನಾತಕೋತ್ತರ ಕೇಂದ್ರವಾಗಿರುವ ರಾಯಚೂರು ಸಮೀಪದ ಯರಗೆರಾದಲ್ಲಿ ಈಗಾಗಲೇ 250 ಎಕರೆ ಜಾಗ ಇರುತ್ತದೆ. ಈ ಸ್ನಾತಕೋತ್ತರ ಕೇಂದ್ರದಲ್ಲಿ ರಾಯಚೂರು ವಿಶ್ವವಿದ್ಯಾಲಯವನ್ನು ಸ್ಥಾಪಿಸಲು ಸರ್ಕಾರದ ಆದೇಶ ಸಂಖ್ಯೆ: ಇಡಿ 236 ಯುಜಿವಿ 2016 (ಭಾಗ-2) ದಿನಾಂಕ: 06.03.2019ರಲ್ಲಿ ರೂ.220.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. |
| (ಈ) | ರಾಯಚೂರಿನಲ್ಲಿ I.I.I.T 2020-21ನೇ ಸಾಲಿನಲ್ಲಿ ಪ್ರವೇಶ ಪ್ರಾರಂಭಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; ಇದಕ್ಕೆ ಬೇಕಾಗಿರುವ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಸರ್ಕಾರ ನೀಡಿರುವ ಅನುದಾನ ಎಷ್ಟು; ಇದರಲ್ಲಿ ಸ್ಥಳೀಯ ವಿದ್ಯಾರ್ಥಿಗಳಿಗೆ ಪ್ರವೇಶಾತಿ ನೀಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ರಾಯಚೂರಿನ I.I.I.T ಯಲ್ಲಿ ಅಭ್ಯರ್ಥಿಗಳಿಗೆ ಪ್ರವೇಶ ಪಡೆಯುವ ಕುರಿತ ಎಲ್ಲಾ ರೂಪುರೇಷೆ, ಮಾನದಂಡಗಳು ಸಂಪೂರ್ಣವಾಗಿ ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯದ ವ್ಯಾಪ್ತಿಗೆ ಒಳಪಡುತ್ತದೆ.<br>2020-21ನೇ ಸಾಲಿನಿಂದ ರಾಯಚೂರಿನಲ್ಲಿ ಐಐಐ-ಟಿಗೆ ಸ್ವಂತ ಕಟ್ಟಡ ನಿರ್ಮಾಣವಾಗುವವರೆಗೆ ರಾಯಚೂರಿನ ಸರ್ಕಾರಿ ಇಂಜಿನೀಯರಿಂಗ್ ಕಾಲೇಜಿನಲ್ಲಿ ತರಗತಿಯನ್ನು ಪ್ರಾರಂಭಿಸಲು ಸರ್ಕಾರವು ಪ್ರಸ್ತಾಪಿಸಿರುತ್ತದೆ.<br>ಸರ್ಕಾರಿ ಇಂಜಿನೀಯರಿಂಗ್ ಕಾಲೇಜಿನ ಆಂತರಿಕ ರಸ್ತೆ ಹಾಗೂ ಲ್ಯಾಂಡ್ ಸ್ಕೇಪಿಂಗ್ ಇತ್ಯಾದಿ ಮೂಲಭೂತ ಸೌಕರ್ಯವನ್ನು ಉನ್ನತೀಕರಿಸುವ ಸಲುವಾಗಿ ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಇಲಾಖೆಯಿಂದ ದಿನಾಂಕ: 28-02-2020ರಂದು ರಾಯಚೂರಿನ ಜಿಲ್ಲಾಧಿಕಾರಿಗಳಿಗೆ ರೂ. 275.00ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. |

ಸಂಖ್ಯೆ: ಇಡಿ 25 ಯುಜಿವಿ 2020

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು
(ಉನ್ನತ ಶಿಕ್ಷಣ, ಐಟಿ & ಬಿಟಿ,
ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ)